# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 94 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್.ಎಂ.ರೇವಣ್ಣ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 15.07.2019 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಎಷ್ಟು ಮೆಟ್ರಿಕ್ ಪೂರ್ವ ಬಾಲಕ/ಬಾಲಕಿಯರ, ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಸತಿ ನಿಲಯಗಳನ್ನು ನಿರ್ವಹಣೆ ಮಾಡಲಾಗುತ್ತಿದೆ; (ಸಂಖ್ಯಾಬಲವನ್ನು ನೀಡುವುದು) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಒಟ್ಟು 2438 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ವಿವರ ಈ ಕೆಳಕಂಡಂತಿವೆ. |

| ವಿವರ | ವಿದ್ಯಾರ್ಥಿನಿಲಯಗಳ ಸಂಖ್ಯೆ | | | ಮಂಜೂರಾತಿ ಸಂಖ್ಯೆ | | |
|---|---|---|---|---|---|---|
| | ಬಾಲಕ | ಬಾಲಕಿ | ಒಟ್ಟು | ಬಾಲಕ | ಬಾಲಕಿ | ಒಟ್ಟು |
| ಮೆಟ್ರಿಕ್–ಪೂರ್ವ | 1012 | 290 | 1302 | 54030 | 15836 | 69866 |
| ಮೆಟ್ರಿಕ್–ನಂತರ | 507 | 629 | 1136 | 52373 | 65177 | 117550 |
| **ಒಟ್ಟು** | **1519** | **919** | **2438** | **106403** | **81013** | **187416** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ | ಇವುಗಳಲ್ಲಿರುವ ನಿಲಯಗಳಿಗೆ ಸಮರ್ಪಕವಾದ ಅಗತ್ಯ ಮೂಲ ಸೌಕರ್ಯಗಳಾದ ಆಹಾರ, ಸ್ಥಳಾವಕಾಶ, ನೀರಿನ ಸೌಕರ್ಯ, ವಿದ್ಯುತ್ ಸೌಲಭ್ಯ, ಲೈಬ್ರರಿ ವ್ಯವಸ್ಥೆ ಇತ್ಯಾದಿ ಸೌಕರ್ಯಗಳನ್ನು ಒದಗಿಸಲಾಗಿದೆ. | 1. ಪ್ರಸ್ತುತ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ರೂ.1500/– ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ರೂ.1600/– ರ ದರದಲ್ಲಿ ಉತ್ತಮ ಗುಣಮಟ್ಟದ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br>2. ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವೊಂದು ವಿದ್ಯಾರ್ಥಿನಿಲಯಗಳಲ್ಲಿ ಸ್ಥಳಾವಕಾಶದ ಕೊರತೆಯಿದ್ದು, ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಹಾಗೂ ನಿವೇಶನದ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಿಸಲಾಗುತ್ತಿದೆ.<br>3. ಎಲ್ಲಾ ವಿದ್ಯಾರ್ಥಿನಿಲಯಗಳ ಕಟ್ಟಡಗಳಲ್ಲಿ ವಿದ್ಯುತ್ ಸೌಲಭ್ಯ ಒದಗಿಸಲಾಗಿರುತ್ತದೆ.<br>4. ಶುದ್ಧ ಕುಡಿಯುವ ನೀರು ಘಟಕ ಸ್ಥಾಪನೆ, ಗ್ರಂಥಾಲಯ ಸೌಕರ್ಯ, ಕಂಪ್ಯೂಟರ್, ಹಾಸಿಗೆ–ಹೊದಿಕೆ ಇತ್ಯಾದಿಗಳನ್ನು ಹಂತ ಹಂತವಾಗಿ ಅನುದಾನ ಲಭ್ಯತೆಗನುಗುಣವಾಗಿ ಒದಗಿಸಲಾಗುತ್ತಿದೆ. |
| ಇ | ಇಲ್ಲದಿದ್ದಲ್ಲಿ, ಈ ಸೌಲಭ್ಯಗಳನ್ನು ಒದಗಿಸಲು ಯಾವ ರೀತಿ ಕ್ರಮವಹಿಸಲಾಗುವುದು? (ಪೂರ್ವ ಮಾಹಿತಿ ನೀಡುವುದು) | ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ಒದಗಿಸಿರುವ ಅನುದಾನದಲ್ಲಿ ಉಳಿಕೆಯಾಗುವ ಅನುದಾನವನ್ನು ವಿದ್ಯಾರ್ಥಿನಿಲಯಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಸೂಚನೆಗಳನ್ನು ನೀಡಲಾಗಿರುತ್ತದೆ.<br>ರಾಜ್ಯವಲಯದಡಿ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಗನುಗುಣವಾಗಿ ವಿದ್ಯಾರ್ಥಿನಿಲಯಗಳಿಗೆ ಕಂಪ್ಯೂಟರ್, ದೂರವಾಣಿ, ಇಂಟರ್ ನೆಟ್, ವೆಬ್ ಕ್ಯಾಮಾರಾ, ಸೋಲಾರ್ ಲೈಟ್, ಟಿ.ವಿ, ಸೋಲಾರ್ ವಾಟರ್ ಹೀಟರ್, ಶುದ್ಧ ಕುಡಿಯುವ ನೀರಿಗಾಗಿ ವಾಟರ್ ಪ್ಯೂರಿಫೈಯರ್ ಹಾಗೂ ಗ್ರಂಥಾಲಯ ಹಾಗೂ ಇನ್ನಿತರೆ ಮೂಲಭೂತ ಸೌಲಭ್ಯವನ್ನು ಒದಗಿಸಲಾಗಿದ್ದು, ಅನುದಾನದ ವಿವರಗಳು ಈ ಕೆಳಕಂಡಂತಿದೆ: |

......2

| ಕ್ರ.ಸಂ | ವರ್ಷ | ಅನುದಾನ (ರೂ.ಕೋಟಿಗಳಲ್ಲಿ) |
|---|---|---|
| 1 | 2014–15 | 20.00 |
| 2 | 2015–16 | 22.15 |
| 3 | 2016–17 | 35.56 |
| 4 | 2017–18 | 10.00 |

ಮುಂದುವರೆದು, ರಾಜ್ಯವಲಯದಡಿ ಉಳಿಕೆಯಾಗುವ ಅನುದಾನದಲ್ಲಿಯೂ ಸಹ ಅವಶ್ಯಕತೆ ಇರುವ ವಿದ್ಯಾರ್ಥಿನಿಲಯಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಕ್ರಮವಹಿಸಲಾಗುತ್ತಿದೆ.

ಸಂ: ಹಿಂವಕ 113 ಬಿಎಂಎಸ್ 2019

(ಸಿ.ಪುಟ್ಟರಂಗಶೆಟ್ಟಿ)
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.